# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 553 |
| ಸದಸ್ಯರ ಹೆಸರು | : | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 24.09.2020 |
| ಉತ್ತರಿಸುವ ಸಚಿವರು | : | ಮಾನ್ಯ ಜಲ ಸಂಪನ್ಮೂಲ ಸಚಿವರು |

<table>
<tr><th>ಕ್ರ ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬೀದರ ಜಿಲ್ಲೆಯಲ್ಲಿ ಹರಿಯುವ ಗೋದಾವರಿ ಬೇಸನ್‌ನಿಂದ ಜಿಲ್ಲೆಗೆ 22.7 ಟಿ.ಎಂ.ಸಿ. ನೀರು ಉಪಯೋಗಿಸಲು ಕೇಂದ್ರ ಸರ್ಕಾರದ ಬಚಾವತ್ ಆಯೋಗದಿಂದ ಅವಾರ್ಡ್ ಆಗಿರುವ ವಿಷಯ ಸರ್ಕಾರದ ಗಮನದಲ್ಲಿಯೇ?</td><td rowspan="2">ಗಮನದಲ್ಲಿದೆ. ಬಚಾವತ್ ಆಯೋಗವು (ಗೋದಾವರಿ ಜಲ ವಿವಾದ ನ್ಯಾಯಾಧೀಕರಣ) ಗೋದಾವರಿ ಜಲಾನಯನಕ್ಕೆ ಸಂಬಂಧಿಸಿದಂತೆ ಅಂತಿಮ ಆದೇಶದ ವರದಿ ಹಾಗೂ ಮುಂದುವರೆದ ಆದೇಶದ ವರದಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ಆಗ ಸಣ್ಣ ನೀರಾವರಿ ಯೋಜನೆಗಳ ಅಡಿಯಲ್ಲಿ ಬಳಕೆಯಾಗುತ್ತಿರುವ 4.6 ಟಿ.ಎಂ.ಸಿ. ನೀರಿನ ಪ್ರಮಾಣದೊಂದಿಗೆ ಹೆಚ್ಚುವರಿಯಾಗಿ 17.77 ಟಿ.ಎಂ.ಸಿ. ನೀರನ್ನು ಹಂಚಿಕೆ ಮಾಡಲಾಗಿದೆ. ಒಟ್ಟಾರೆ 22.37 ಟಿಎಂಸಿ ಪ್ರಮಾಣದಷ್ಟು ನೀರನ್ನು ಕರ್ನಾಟಕ ರಾಜ್ಯವು ಉಪಯೋಗಿಸಬಹುದಾಗಿದೆ. ಗೋದಾವರಿ ನದಿ ಕಣಿವೆಯಲ್ಲಿ ಕರ್ನಾಟಕಕ್ಕೆ ದೊರೆತ ಪಾಲಿನಲ್ಲಿ ಯೋಜನಾವಾರು ವಿವರ ಈ ಕೆಳಗಿನಂತಿದೆ:
<table>
<tr><th>ಕ್ರಸಂ</th><th>ಯೋಜನೆ</th><th>ನೀರಿನ ಪ್ರಮಾಣ</th></tr>
<tr><td>1</td><td>ಕಾರಂಜಾ</td><td>13.10 ಟಿಎಂಸಿ</td></tr>
<tr><td>2</td><td>ಚುಲ್ಕಿ ನಾಲಾ</td><td>01.17 ಟಿಎಂಸಿ</td></tr>
<tr><td>3</td><td>ಮಾಂಜ್ರಾ ಏತ ನೀರಾವರಿ</td><td>01.00 ಟಿಎಂ</td></tr>
<tr><td>4</td><td>ನಿಜಾಮ್ ಸಾಗರ್ ಕೆಳಗಿನ ಕರ್ನಾಟಕ ಭಾಗದ ಜಲಾನಯನ ಪ್ರದೇಶದಲ್ಲಿ</td><td>02.50 ಟಿಎಂಸಿ</td></tr>
<tr><td>5</td><td>ಸಣ್ಣ ನೀರಾವರಿ ಯೋಜನೆಗಳಿಂದ</td><td>04.60 ಟಿಎಂಸಿ</td></tr>
<tr><td colspan="2">ಒಟ್ಟು:</td><td>22.37 ಟಿಎಂಸಿ</td></tr>
</table>
ಮಾಂಜ್ರಾ ಏತ ನೀರಾವರಿಗಾಗಿ 1.00 ಟಿ.ಎಂ.ಸಿ ನೀರನ್ನು ನಿಗದಿಪಡಿಸಲಾಗಿತ್ತು. ಮಾಂಜ್ರಾ ಏತ ನೀರಾವರಿ ಯೋಜನೆ ಪ್ರಸ್ತಾವನೆಯನ್ನು ತಾಂತ್ರಿಕ ಸಲಹಾ ಸಮಿತಿಯ ಮುಂದೆ ಮಂಡಿಸಲಾಗಿ, ಸಮಿತಿಯು, ಪ್ರಸ್ತಾಪಿಸಿರುವ 1.00 ಟಿಎಂ.ಸಿ ಬದಲಾಗಿ, ಕಾರಂಜಾ ಯೋಜನೆಯ ವರದಿಯಲ್ಲಿ ಪ್ರಸ್ತಾಪಿಸಿರುವ ಬೆಳೆ-ನೀರು ಲೆಕ್ಕಾಚಾರವನ್ನು ಅವಲೋಕಿಸಿ, ಈ ಯೋಜನೆಯಲ್ಲಿ 9.30ಟಿ.ಎಂ.ಸಿ ನೀರು ಬಳಕೆಯನ್ನು ಅಂತಿಮಗೊಳಿಸಿರುವುದನ್ನು ಉಲ್ಲೇಖಿಸಿ, ಅದರಂತೆ 3.80 ಟಿ.ಎಂ.ಸಿ. ಉಳಿದಿದ್ದು, ಇದನ್ನು ಸೇರಿಸಿಕೊಂಡು (1.00 +3.80) ಒಟ್ಟು 4.80 ಟಿ.ಎಂ.ಸಿ. ನೀರನ್ನು ಮಾಂಜ್ರಾದಲ್ಲಿ ಈ ಕೆಳಗಿನಂತೆ ಉಪಯೋಗಿಸಿಕೊಳ್ಳಲು ಯೋಜಿಸಲಾಗಿರುತ್ತದೆ:
<table>
<tr><th>ಕ್ರ ಸಂ</th><th>ಬ್ಯಾರೇಜ್ ಹೆಸರು</th><th>ನೀರಿನ ಬಳಕೆ (ಟಿ.ಎಂ.ಸಿ)</th></tr>
<tr><td>1</td><td>ಜೀರಗಿಹಾಳ್</td><td>0.78</td></tr>
<tr><td>2</td><td>ಮಾಣೀಕೇಶ್ವರ</td><td>0.78</td></tr>
<tr><td>3</td><td>ಹಾಲಹಳ್ಳಿ</td><td>2.46</td></tr>
<tr><td>4</td><td>ಚಂದಾಪುರ</td><td>0.78</td></tr>
<tr><td colspan="2">ಒಟ್ಟು:</td><td>4.80</td></tr>
</table>
</td></tr>
<tr><td>ಆ)</td><td>ಗಮನದಲ್ಲಿದ್ದರೆ ಆ 22.7 ಟಿ.ಎಂ.ಸಿ. ನೀರನ್ನು ಉಪಯೋಗ ಮಾಡಲು ಸರ್ಕಾರ ಯಾವ ಯಾವ ಯೋಜನೆ ರೂಪಿಸಿದೆ; ರೂಪಿಸಿರುವ ಯೋಜನೆಗಳು ಯಾವುವು? ಇಲ್ಲದಿದ್ದಲ್ಲಿ ಇದಕ್ಕೆ ಕಾರಣವೇನು?</td></tr>
</table>

ಸಂಖ್ಯೆ: ಜಸಂಇ 126 ಎಂಎಲ್ಎ 2020

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು